# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)
(ಮುಂದುವರೆದ ಉಪವೇಶನ)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 24ನೇ ಜುಲೈ, 2013
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಒಂಭತ್ತನೇ ಪಟ್ಟಿ**

**ಆ) ದಿನಾಂಕ:17ನೇ ಜುಲೈ, 2013ರ 4ನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ರಾಜೀವ್ ಪಿ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 25(123) : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು**

**ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಒಂಭತ್ತನೇ ಪಟ್ಟಿ**

### 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಕಾರ್ಯದರ್ಶಿಯವರು:-**

13ನೇ ವಿಧಾನಸಭೆಯ ಕರ್ನಾಟಕ ವಿಧಾನಮಂಡಲದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಉಪ ಸಮಿತಿಯ 2011-12ನೇ ಸಾಲಿನ ಎರಡನೇ ವಿಶೇಷ ವರದಿಯನ್ನು ಸಭೆಯ ಮುಂದಿಡುವುದು.

### 3. ವಿತ್ತೀಯ ಕಾರ್ಯಕಲಾಪಗಳು

2013-14ನೇ ಸಾಲಿನ ಪರಿಷ್ಕೃತ ಆಯವ್ಯಯ ಅಂದಾಜುಗಳ ಮೇಲೆ ಮುಂದುವರೆದ ಸಾಮಾನ್ಯ ಚರ್ಚೆ ಹಾಗೂ ಬೇಡಿಕೆಗಳ ಮೇಲಿನ ಚರ್ಚೆ.

| ಬೇಡಿಕೆ ಸಂಖ್ಯೆ | ಬೇಡಿಕೆಗಳ ಹೆಸರು |
|---|---|
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 24 | ಇಂಧನ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವೆಗಳು |
| 17 | ಶಿಕ್ಷಣ |

**ಪು.ತಿ.ನೋ.,**

| | |
|---|---|
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ |
| 14 | ಕಂದಾಯ |
| 20 | ಲೋಕೋಪಯೋಗಿ |
| 05 | ಒಳಾಡಳಿತ ಮತ್ತು ಸಾರಿಗೆ |
| 09 | ಸಹಕಾರ |
| 16 | ವಸತಿ |
| 19 | ನಗರಾಭಿವೃದ್ಧಿ |
| 21 | ಜಲಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 10 | ಸಮಾಜ ಕಲ್ಯಾಣ |
| 15 | ಮಾಹಿತಿ ತಂತ್ರಜ್ಞಾನ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 01 | ಕೃಷಿ ಮತ್ತು ತೋಟಗಾರಿಕೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 25 | ಕನ್ನಡ ಮತ್ತು ಸಂಸ್ಕೃತಿ |
| 23 | ಕಾರ್ಮಿಕ |

## 4. ಗಮನ ಸೆಳೆಯುವ ಸೂಚನೆಗಳು

1. ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ, ಡಿ.ನಾಗರಾಜಯ್ಯ ಮತ್ತು ಕೆ.ಎಂ.ಶಿವಲಿಂಗೇಗೌಡ ಅವರುಗಳು ಹಾಸನ ಜಿಲ್ಲೆಯಲ್ಲಿ ರಾಜೀವ್‌ಗಾಂಧಿ ವಸತಿ ನಿಗಮದ ವತಿಯಿಂದ ಅರ್ಹ ಫಲಾನುಭವಿಗಳು ಆಶ್ರಯ ಯೋಜನೆಯಡಿಯಲ್ಲಿ ಮನೆಗಳನ್ನು ನಿರ್ಮಿಸಿಕೊಂಡಿದ್ದರೂ ಸರ್ಕಾರ ಹಣ ಪಾವತಿ ಮಾಡದಿರುವುದರಿಂದ ಉಂಟಾಗಿರುವ ತೊಂದರೆ ಬಗ್ಗೆ ಮಾನ್ಯ ವಸತಿ ಸಚಿವರ ಗಮನ ಸೆಳೆಯುವುದು.

2. ಶ್ರೀ ಬಿ.ಎಸ್. ಯಡಿಯೂರಪ್ಪ ಅವರು ಶರಾವತಿ ಹಿನ್ನೀರಿನ ಮುಳುಗಡೆ ಪ್ರದೇಶವಾದ ತುಮರಿ ಭಾಗದ ಹೊಳೆ ಬಾಗಿಲು ಸೇತುವೆ ನಿರ್ಮಾಣ ಕಾಮಗಾರಿ ವಿಳಂಬವಾಗುತ್ತಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

ಮು.ತಿ.ನೋ.,

3. ಶ್ರೀಮತಿ ಶಾರದಾ ಪೂರ್ಯ ನಾಯಕ ಅವರು ರಾಜ್ಯದಲ್ಲಿ 2013-14ನೇ ಸಾಲಿನಲ್ಲಿ 100ಕ್ಕಿಂತ ಹೆಚ್ಚಿನ ಸಂಖ್ಯಾಬಲ ಮಂಜೂರು ಮಾಡಲಾಗಿರುವ ಮೆಟ್ರಿಕ್ ನಂತರದ ಪುರುಷ ಹಾಗೂ ಮಹಿಳಾ ವಿದ್ಯಾರ್ಥಿನಿಲಯಗಳಿಗೆ ಹೊಸ ಪ್ರವೇಶವನ್ನು ನಿರಾಕರಿಸಿರುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

4. ಶ್ರೀ ವಿಶ್ವನಾಥ ಈ ಪಾಟೀಲ್ ಅವರು ಸರ್ಕಾರದವರ ಬೆಳವಡಿ ಮಲ್ಲಮ್ಮನ ಉತ್ಸವವನ್ನು ನಡೆಸುತ್ತಿರುವ ಹಿನ್ನಲೆಯಲ್ಲಿ ಬೆಳವಡಿಯನ್ನು ಪ್ರವಾಸಿ ತಾಣವನ್ನಾಗಿ ಮಾಡುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯವುದು.

5. ಶ್ರೀ ರಾಜೀವ್ ಪಿ. ಅವರು ರಾಜ್ಯದಲ್ಲಿರುವ ಪರವಾನಗಿ ಪಡೆದ ಭೂ ಮಾಪಕರನ್ನು ಸೇವಾ ಜೇಷ್ಠತೆ ಆಧಾರದ ಮೇಲೆ ನೇಮಕಾತಿ ಮಾಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

6. ಶ್ರೀ ಮನೋಹರ್ ಹೆಚ್. ತಹಶೀಲ್ದಾರ್ ಅವರು ಬರಗಾಲದಲ್ಲಿ ಮಳೆ ಆಶ್ರಿತ ಪ್ರದೇಶಗಳ ರೈತರಿಗೆ ನೀಡಲಾಗುತ್ತಿದ್ದ ಬೆಳೆ ವಿಮೆ ಮಾದರಿಯಲ್ಲಿಯೇ ನೀರಾವರಿ ಆಧಾರಿತ ಬೆಳೆಗಳಿಗೂ ಬೆಳೆ ವಿಮೆ ಮಂಜೂರು ಮಾಡುವ ಬಗ್ಗೆ ಮಾನ್ಯ ಕೃಷಿ ಸಚಿವರ ಗಮನ ಸೆಳೆಯುವುದು.

7. ಡಾ|| ಕೆ.ಶ್ರೀನಿವಾಸ ಮೂರ್ತಿ ಅವರು ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಎಡೇಹಳ್ಳಿ ಗ್ರಾಮದ ಜಮೀನುಗಳನ್ನು ಕೈಗಾರಿಕೆಗಳ ಸ್ಥಾಪನೆಗಾಗಿ ಭೂಸ್ವಾಧೀನ ಪಡಿಸಿಕೊಂಡು ಇತರೆ ಕಂಪನಿಗಳಿಗೆ ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

8. ಶ್ರೀ ಹೆಚ್.ಸಿ. ಬಾಲಕೃಷ್ಣ ಅವರು ರಾಮನಗರ ಜಿಲ್ಲೆ ದೊಡ್ಡಗಂಗವಾಡಿ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತದಲ್ಲಿ ಅಕ್ರಮವಾಗಿ ಕೆ.ಸಿ.ಸಿ. ಸಾಲ ನೀಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟುಮಾಡಿರುವ ಬಗ್ಗೆ ಮಾನ್ಯ ಸಹಕಾರ ಸಚಿವರ ಗಮನ ಸೆಳೆಯುವುದು.

## 5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಬಿ.ಆರ್.ಯಾವಗಲ್, ಬಿ.ಬಿ.ಚಿಮ್ಮನಕಟ್ಟಿ, ಜಿ.ಎಸ್.ಪಾಟೀಲ್ ಮತ್ತು ಎನ್.ಹೆಚ್.ಕೋನರಡ್ಡಿ ಅವರುಗಳು ಹಿಂದಿನ ಎರಡು ವರ್ಷಗಳಿಂದ ಮಲಪ್ರಭಾ ನೀರಾವರಿ ಯೋಜನೆಯ ಪ್ರದೇಶದಲ್ಲಿನ "ಬರಗಾಲ ಪರಿಸ್ಥಿತಿ" ಬಗ್ಗೆ ಹಾಗೂ ಕೊರತೆಯಿರುವ ನೀರನ್ನು ಮಹದಾಯಿ ನದಿಕೊಳ್ಳದಿಂದ ಪಡೆಯಲು ಅಗತ್ಯ ಕ್ರಮಗಳ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

ಮು.ತಿ.ನೋ.,

2. ಶ್ರೀಯುತರುಗಳಾದ ಗೋವಿಂದ ಎಂ. ಕಾರಜೋಳ, ಎಸ್. ಸುರೇಶ್ ಕುಮಾರ್, ಅಪ್ಪಚ್ಚುರಂಜನ್ ಅವರುಗಳು ದಿನಾಂಕ:16.07.2013ರ ಉದಯವಾಣಿ, ವಿಜಯಕರ್ನಾಟಕ ದಿನ ಪತ್ರಿಕೆಗಳಲ್ಲಿ "ವೀರ ಬಸವಣ್ಣ" ಚಿತ್ರದ ಲುಕ್ ಬಿಡುಗಡೆಯಾಗಿದ್ದು ಬಸವಣ್ಣನವರಂಥ ದಾರ್ಶನಿಕ ಹಾಗೂ ಸಚ್ಚಾರಿತ್ರ್ಯದ ಮಹಾಪುರುಷರನ್ನು ಅರ್ಥಹೀನ ಕಮರ್ಷಿಯಲ್ ಸಿನಿಮಾಗೆ ಬಳಸಿರುವುದನ್ನು ವಿರೋಧಿಸುವ ವಿಚಾರದಲ್ಲಿ ನೀಡಿರುವ ಸೂಚನೆಯ ಬಗ್ಗೆ ಚರ್ಚೆ.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

Raj N

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(www.kar.nic.in/kla)